ದೇವರ ಕೊಂಡಾರೆಡ್ಡಿ

# ದೊಡ್ಡಬೇಗೂರಿನ ನಾಗತ್ತರನ ಶಾಸನ

ಈ ಶಾಸನವು ಬೆಂಗಳೂರು ದಕ್ಷಿಣ ತಾಲೂಕಿನಲ್ಲಿ ಹೋಬಳಿ ಕೇಂದ್ರವಾಗಿರುವ ದೊಡ್ಡ ಬೇಗೂರಿನ ನಾಗೇಶ್ವರ ದೇವಾಲಯದಲ್ಲಿದೆ. ಇತ್ತೀಚೆಗೆ ದೇವಾಲಯಕ್ಕೆ ಸುತ್ತುಗೋಡೆ ಹಾಕಿಸಲು ತಳಪಾಯ ತೋಡುತ್ತಿದ್ದಾಗ ಹಳೆಯ ತಳಪಾಯದ ಅವಶೇಷಗಳಲ್ಲಿ ಸೇರಿಹೋಗಿತ್ತು. ದೇವಾಲಯದ ಅರ್ಚಕರು ಶಾಸನವನ್ನು ಅಲ್ಲಿಂದ ತೆಗೆಸಿ ಸುರಕ್ಷಿತವಾಗಿ ಒಂದೆಡೆ ಇರಿಸಿ ವಿಷಯವನ್ನು ತಿಳಿಸಿದರು.

ಶಾಸನವು ೦.೯೧ ಸೆಂ.ಮೀ. ಉದ್ದ ಹಾಗೂ ೦.೯೮ ಸೆಂ.ಮೀ. ಅಗಲವಿದ್ದು, ೧೪ ಸಾಲುಗಳನ್ನು ಹೊಂದಿದೆ. ಶಾಸನವನ್ನು ಹಿಂದೆ ಸುತ್ತುಗೋಡೆಗೆ ಬಳಸಿದ್ದುದರಿಂದ ಶಾಸನದ ಅಂಚುಗಳನ್ನು ಒಡೆದಿರುತ್ತಾರೆ. ಹೀಗಾಗಿ ಅಂಚಿನಲ್ಲಿದ್ದ ಕೆಲವು ಅಕ್ಷರಗಳು ಒಡೆದಿದ್ದು ಪೂರ್ಣವಾಗಿ ಸಿಗುವುದಿಲ್ಲ.

ಶಾಸನದ ಲಿಪಿ ಈಗಾಗಲೇ ಬೆಂಗಳೂರು ವಸ್ತು ಸಂಗ್ರಹಾಲಯದಲ್ಲಿದ್ದು, ಪ್ರಸಿದ್ಧವಾಗಿರುವ ಅದೇ ಊರಿನ ನೀತಿಮಾರ್ಗನ ಶಾಸನದ ಲಿಪಿಗಳನ್ನು ಹೋಲುತ್ತದೆ ಮತ್ತು ಅದೇ ಶಾಸನದಲ್ಲಿ ಉಕ್ತನಾಗಿರುವ ನಾಗತ್ತರನನ್ನು ಹೆಸರಿಸುತ್ತದೆ. ಈ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ.

ಶಾಸನದಲ್ಲಿ ಉಕ್ತನಾಗಿರುವ ನಾಗತ್ತರನು ಆನೇಕಲ್ ತಾಲೂಕಿನ ಮತ್ತು ಬೆಂಗಳೂರು ದಕ್ಷಿಣ ತಾಲೂಕಿನ ಅನೇಕ ಶಾಸನಗಳಲ್ಲಿ ಉಕ್ತನಾಗಿದ್ದಾನಾದರೂ ಯಾವುದರಲ್ಲಿಯೂ ಕಾಲದ ಉಲ್ಲೇಖವಿಲ್ಲ. ಬೇಗೂರಿನಲ್ಲಿ ದೊರೆಯುವ ನಾಲ್ಕು ಶಾಸನಗಳಲ್ಲಿ ಇವನ ಹೆಸರು ಉಕ್ತವಾಗುತ್ತದೆ. ಈ ಶಾಸನಗಳ ಕಾಲವನ್ನು ಶ್ರೀ ಬಿ.ಎಲ್. ರೈಸ್ ಅವರು ಸು. ೮೯೦ ಎಂದು ನಿಗದಿಗೊಳಿಸಿರುತ್ತಾರೆ.

ಬೆಂಗಳೂರು ವಸ್ತುಸಂಗ್ರಹಾಲಯದ ಶಾಸನದಲ್ಲಿ ನಾಗತ್ತರನು ಸತ್ತ ಉಲ್ಲೇಖ ಬಂದಿರುವುದರಿಂದ ಇದು ಅವನ ಕೊನೆಯ ಶಾಸನವೆಂದು ಪರಿಗಣಿಸಿ ಇದರ ಕಾಲವನ್ನು ಕ್ರಿ.ಶ. ಸು ೯೦೦ ಎಂದು ಪರಿಗಣಿಸಿದರೆ, ಈಗ ದೊರೆತಿರುವ ಶಾಸನವು ನಾಗತ್ತರನು ಬೀರವರ್ಮನನ್ನು ಸಾಧಿಸಿದ ನಂತರ ದೇವಾಲಯವನ್ನು ಕಟ್ಟಿಸಿದ ಉಲ್ಲೇಖ ಬರುವುದರಿಂದ, ಅವನು ಬದುಕಿದಾಗಿನ ಅವಧಿಯ ಶಾಸನವಾದುದರಿಂದ ಇದರ ಕಾಲವನ್ನು ಕ್ರಿ.ಶ. ಸು ೮೯೦ ಎಂದು ನಿಗದಿಗೊಳಿಸುವುದು ಸೂಕ್ತವೆಂದು ಕಾಣುತ್ತದೆ.

ಪ್ರಸ್ತುತ ಶಾಸನದಲ್ಲಿ ನಾಗತ್ತರನನ್ನು ವೃಷಭಲಾಂಛನಂ, ಸಮರಪ್ರವೀಣಂ, ಕಾಮಿನೀಕಾಮಂ, ಸತ್ಯರಾಧೇಯಂ, ಸಾಮಂತಸುಂದರಂ, ಲೀಲಾಪುರಂದರಂ, ಘಟೇಯಂ ಮುಂತಾದ ವಿಶೇಷಣಗಳಿಂದ ಹೊಗಳಿದೆ. ಈ ಶಾಸನವಲ್ಲದೆ ಅಗರದ ಸತ್ಯವಾಕ್ಯ ಪೆರ್ಮಾಡಿ ಕಾಲದ ಶಾಸನದಲ್ಲಿ ಇವನ ಆಳು ಇರುಗನೆಂಬುವವನು ಕೆರೆಯನ್ನು ಕಟ್ಟಿಸಿ ಎರಡು ತೂಬುಗಳನ್ನು ಇಟ್ಟಂತೆ ಹೇಳಿದ್ದು, ಇವನನ್ನು ಆ ಶಾಸನದಲ್ಲಿ 'ಕಲಿಯುಗದ ಅಣುವ'ನೆಂದು ಕರೆದಿದೆ. ಇವನ ಶಾಸನಗಳಿಂದ ತಿಳಿದು ಬರುವ ಕೆಲವು ಮಾಹಿತಿಗಳನ್ನು ಇಲ್ಲಿ ನೀಡುವುದು ಮುಖ್ಯ. ಸತ್ಯವಾಕ್ಯ ಪೆರ್ಮಾಡಿಯ ಕಾಲದಿಂದಲೂ (೮೭೮–೯೦೫) ಈತ ಬೆಂಪೂರುನಾಡನ್ನು ನೋಡಿಕೊಳ್ಳುತ್ತಿದ್ದ. ಎರೆಯಪ್ಪನ (೮೮೬–೯೨೧) ಕಾಲದಲ್ಲಿಯೂ

ಇದೇ ನಾಡಿನ ಅಧಿಕಾರಿಯಾಗಿದ್ದ ಈತನಿಗೆ ತೊಣ್ಣಬ್ಬೆ ಎಂಬ ಮಗಳೂ, ಬುಟ್ಟಣ ಸೆಟ್ಟಿ ಎಂಬ ಮಗನೂ ಪೆಗೂರ ಎಂಬ ಮನೆಮಗನೂ ಇರುತ್ತಾನೆ. ಬುಟ್ಟಣ ಸೆಟ್ಟಿಯು ಬೆಂಗಳೂರ ಕೋಟೆ ಕಾಳಗದಲ್ಲಿ ಸತ್ತ. ಪೆಗೂರ ಸಹ ಯಾವುದೋ ತುರುಗೊಳಲ್ಲಿ ಸಾಯುತ್ತಾನೆ. ನಾಗತ್ತರ ತುಂಬೆಪಾಡಿ ಯುದ್ಧದಲ್ಲಿ ಸಾಯುತ್ತಾನೆ. ಬಹುಶಃ ಈತನ ಸಾವಿನ ನಂತರ ಇವನ ಮಗಳು ತೊಣ್ಣಬ್ಬೆ ಸನ್ಯಸನ ವಿಧಿಯಿಂದ ಮುಡಿಪಿದಂತೆ ತಿಳಿಯುತ್ತದೆ. ಈಗ ದೊರೆತಿರುವ ಈ ಶಾಸನದಲ್ಲಿ ಇವನನ್ನು ನನ್ನಿಪೆರ್ಬ್ಬಾಣನೆಂದಿದೆ. ಬಾಣ ವಂಶಸ್ಥರು ಅಲ್ಲಲ್ಲಿ ಗಂಗರ ಅಧಿಕಾರಿಗಳಾಗಿದ್ದರೆಂದು ಇತರೆ ಶಾಸನಗಳಿಂದ ತಿಳಿಯುತ್ತದೆ. ವರ್ತೂರಿನ ಮತ್ತು ಚೆಲ್ಲಂಪಟ್ಟ....ಶಾಸನಗಳಲ್ಲಿ ಮಹಾಬಲಿವಂಶದ ನಿಜಪನ ಮಗ ಅಣ್ಣಿಗನ ಉಲ್ಲೇಖವಿದೆ. ಬಹುಶಃ ಈ ನಾಗತ್ತರನೂ ಬಾಣ ವಂಶದವನಾಗಿದ್ದು ಗಂಗರ ಅಧೀನದಲ್ಲಿ ಸೇವೆ ಸಲ್ಲಿಸುತ್ತಿದ್ದಿರಬಹುದು.

ಈ ಶಾಸನದಲ್ಲಿ ಉಕ್ತವಾಗಿರುವ ಇನ್ನೊಂದು ಹೆಸರು ಬೀರವರ್ಮ. ಈತ ಯಾರೆಂದು ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಬೀರವರ್ಮ ಎಂಬ ವ್ಯಕ್ತಿ ಆ ಕಾಲದ ರಾಜ ಮನೆತನದ ಶಾಸನಗಳಲ್ಲಿ ಕಾಣಸಿಗುವುದಿಲ್ಲ. ಆದರೆ ಇದೇ ಊರಿನಿಂದ ತಂದು ಈಗ ಬೆಂಗಳೂರು ಮ್ಯೂಸಿಯಂನಲ್ಲಿ ಇಟ್ಟಿರುವ ವೀರಗಲ್ಲಿನಲ್ಲಿ ಬೀರಮಹೇಂದ್ರ ಎಂಬ ವ್ಯಕ್ತಿಯು ಉಲ್ಲೇಖವಾಗಿದ್ದಾನೆ. ಬಹುಶಃ ಪ್ರಸ್ತುತ ಶಾಸನದಲ್ಲಿನ ಬೀರವರ್ಮ ಬೀರಮಹೇಂದ್ರನೇ ಆಗಿದ್ದಿರಬಹುದು. ಬೇರೆ ಆಧಾರಗಳು ದೊರೆಯುವವರೆಗೆ ಬೀರವರ್ಮನನ್ನು ಬೀರಮಹೇಂದ್ರನೆಂದು ಭಾವಿಸುವುದು ಸೂಕ್ತವೆಂದು ತೋರುತ್ತದೆ.

ಶಾಸನದ ವಿಷಯದಂತೆ ನಾಗತ್ತರನು ವೀರವರ್ಮನನ್ನು ಸಾಧಿಸಿಬಲ್ಲವರಸರನ್ನಟ್ಟಿ? ಬೆಂಪೂರಿನಲ್ಲಿ ಸೋಮನಾಥ ದೇವಾಲಯವನ್ನು ಮಾಡಿಸಿ ದಿವ್ಯಸಕ್ತಿ ಭಟಾರರಿಗೆ ಎಲ್ಲಾ ಕಾಲಕ್ಕೆ ಕೆಲವು ದಾನಗಳನ್ನು ಬಿಡುತ್ತಾನೆಂದಿದೆ. 'ಬಲ್ಲವರಸರಟ್ಟಿಲ್' ಎಂಬ ಪದ ಬಂದಿರುವುದರಿಂದ ಇಮ್ಮಡಿ ರಾಚಮಲ್ಲನ ಕಾಲದಲ್ಲಿಯೂ ಗಂಗ ರಾಷ್ಟ್ರಕೂಟರ ಯುದ್ಧ ಮುಂದುವರಿದಿರಬಹುದೇ ಎಂಬ ಸಂದೇಹ ಮೂಡುತ್ತದೆ.

**ಶಾಸನ ಪಾಠ**

1. ಸ್ವಸ್ತಿ ಸಮ.......ಧಿಮದ.......
2. ....ನೆ ರೊಳ್ಗಂಡ ಶ್ರೋಣೀತಪುರವರೇಶ್ವರ ....ಶ್ವರರ
3. ....ನಾತ್ಮಜಂ ಹರವೃಷಭಲಾಂಛನಂ .... ತ್ರಿ. ತ್ಥಿ ಕೋಪನಂ ಬಲಿ
4. ಷಣಂ ನನ್ನಿ ಪೆರ್ಬ್ಬಾಣ [ಂ] ಸಮರಪ್ರವೀಣಂ ಕಾಮಿನೀಕಾಮಂ ಮಹಾ
5. ಸತ್ಯರಾಧೇಯಂ ಸಾಮನ್ತಸುನ್ದರಂ ಲೀಳಾಪುರನ್ದರಂ ಘಟೇಯ [ಂ ?]
6. ಶ್ರೀಮತ್ ನಾಗತ್ತರಂ ಬೀರವರ್ಮನ ಸಾಧಿಸಿ ಬಲ್ಲವರಸ ರಟ್ಟ....
7. ಬೆಂಪೂರೊಳ್ ಸೋಮನಾತನ ದೇಗುಲಮುಮ್ಮಾಡಿಸಿ ದಿವ್ಯಾಸಕ್ತಿ ಭಟ
8. ರ್ಗ್ಗೆಲ್ಲಾಕಾಲಕ್ಕಂ ತೆಱೆಯಾ ಬಿಟ್ಟು ಕಾಲಂಕಟ್ಟಿ ಧಾರೆಯನೆರೆದು ಬಿ....
9. ....ಕಱಿಟ್ಟಿಗೆಯೂ ಬಿಟ್ಟು ಕವಿಲೆ ನರೆಯುಮಂ ಕೊಟ್ಟು [ಪ]
10. (ಬ್ಬ)ತ್ತು ಖಣ್ಡುಗ ಮಣ್ಣುಮಂ ಸರ್ವ್ವಾಭ್ಯನ್ತರ ಸಿದ್ದಿಯಾಗಿರೆ ಕೊಟ್ಟನ್....
11. ಸಿಯುಮನಟಿದೊಂ ಪಂಚಮಹಾಪಾತಕಂ ಸ್ವದತ್ತಂ ಪರದತ್ತಂ ವಾಯೋ
12. ........ಯಪಾತ ಗಾ ಯೋ[ನ]ರಮ್ ಬ್ರಹ್ಮಸ್ವಸ್ತು ವಿಷಂ ಘೋರಂ ನಾದಿ
13. ಹನ್ತಿ ದೇವಸ್ವಂ ಪುತ್ರ ಪೌತ್ರಿಕಂ ಈ ಧನ ನಮಂ[ಪೊತ್ತ] ಬಟ್ಟಗಿಕಡು
14. ದೆ........ದುಕ್ಕಂ ಕೇಡಂಗೆಯ್ವೋನುಣ್ಬಾತನ್ನೀ ದೇಗುಲಗಳಂ ಪಡಿಸಲಿ